# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಮಾರ್ಚ್ ೨೬, ೨೦೧೫ (ಚೈತ್ರ ೫, ಶಕ ವರ್ಷ ೧೯೩೭)<br>Bengaluru, Thursday, March 26, 2015 (Chaithra 5, Shaka Varsha 1937) | ಸಂಚಿಕೆ ೧೩<br>Issue 13 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆ ಹುಮನಾಬಾದ ತಾಲ್ಲೂಕಿನ ಬೋರಂಪಳ್ಳಿ ಗ್ರಾಮದ ಸ.ನಂ. 116ರಲ್ಲಿ 34 ಎಕರೆ 06 ಗುಂಟೆ ಜಮೀನು "ಟ್ರೈಬಲ್ ಪಾರ್ಕ್" ಸ್ಥಾಪಿಸಲು ಕರ್ನಾಟಕ ತಾಂಡ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರಿಗೆ ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ :**

1) ಪ್ರಾದೇಶಿಕ ಆಯುಕ್ತರು, ಕಲಬುರಗಿ ವಿಭಾಗ, ಕಲಬುರಗಿ ಇವರ ಪತ್ರ ಸಂಖ್ಯೆ: ಕಂ.ಪ್ರಾಆಕ/ಭೂಮಿ-1/151/2014-15, ದಿನಾಂಕ: 24-11-2014

2) ಜಿಲ್ಲಾಧಿಕಾರಿ, ಬೀದರ್ ಜಿಲ್ಲೆ, ಇವರ ಪತ್ರ ಸಂಖ್ಯೆ: ಕಂ/ಎಲ್.ಎನ್.ಡಿ.ಸಿಆರ್-79/2014-15, ದಿನಾಂಕ : 22-11-2014

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ, ಪ್ರಾದೇಶಿಕ ಆಯುಕ್ತರು, ಕಲಬುರಗಿ ವಿಭಾಗ, ಇವರು ಬೀದರ್ ಜಿಲ್ಲೆ, ಹುಮನಾಬಾದ ತಾಲ್ಲೂಕಿನ ಬೋರಂಪಳ್ಳಿ ಗ್ರಾಮದ ಸರ್ಕಾರಿ ಗಾಯರಾಣ ಸ.ನಂ. 116ರಲ್ಲಿ 34.06 ಎಕರೆ ಜಮೀನನ್ನು "ಟ್ರೈಬಲ್ ಪಾರ್ಕ್" ಸ್ಥಾಪಿಸಲು ಕರ್ನಾಟಕ ತಾಂಡಾ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರಿಗೆ ಮಂಜೂರು ಮಾಡುವ ಬಗ್ಗೆ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ, ಬೀದರ್ ಇವರು, ಬೀದರ್ ಜಿಲ್ಲೆಯ ಹುಮನಾಬಾದ್ ತಾಲ್ಲೂಕಿನ ಬೋರಂಪಳ್ಳಿ ಗ್ರಾಮದ **ಸರ್ಕಾರಿ ಗಾಯರಾಣ ಭೂಮಿ** ಸ.ನಂ. 116ರಲ್ಲಿ ಆಕಾರ್ ಬಂದ್ ಪ್ರಕಾರ ಒಟ್ಟು 180 ಎಕರೆ ಜಮೀನಿದ್ದು, ಇದರಲ್ಲಿ 61 ಎಕರೆ 38 ಗುಂಟೆ ಜಮೀನು 'ಸಿ' ಫಾರಂ ಮಂಜೂರಾಗಿದ್ದು, 61 ಎಕರೆ 28 ಗುಂಟೆ ಮತ್ತು 19 ಎಕರೆ 08 ಗುಂಟೆ ಕ್ರಮವಾಗಿ ನಮೂನೆ 50 ಮತ್ತು 53 ರಲ್ಲಿ ಅರ್ಜಿ ಸಲ್ಲಿಸಿರುತ್ತಾರೆಂದು ಹಾಗೂ 3 ಎಕರೆ ಜಮೀನು ರಸ್ತೆಗಾಗಿ ಇರುತ್ತದೆಂದು ತಿಳಿಸಿರುತ್ತಾರೆ. ಮುಂದುವರೆದು ಇದರ ಒಟ್ಟು ವಿಸ್ತೀರ್ಣ 145 ಎಕರೆ 34 ಗುಂಟೆ ಜಮೀನಿದ್ದು, ಇದನ್ನು ಹೊರತುಪಡಿಸಿ 34 ಎಕರೆ 06 ಗುಂಟೆ ಜಮೀನು ಬಾಕಿ ಉಳಿದಿರುತ್ತದೆ. ಹೀಗೆ ಬಾಕಿ ಉಳಿದ ಜಮೀನನ್ನು ಟ್ರೈಬಲ್ ಪಾರ್ಕ್ ಸ್ಥಾಪಿಸಲು ಕರ್ನಾಟಕ ತಾಂಡ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರಿಗೆ ಮಂಜೂರು ಮಾಡಬಹುದಾಗಿದೆ ಎಂದು ತಿಳಿಸಿರುತ್ತಾರೆ.

ಮುಂದುವರೆದು ಬೋರಂಪಳ್ಳಿ ಗ್ರಾಮದಲ್ಲಿನ ಜಾನುವಾರುಗಳ ಸಂಖ್ಯೆ ಒಟ್ಟು 575 ಇದ್ದು, ಈ ಜಾನುವಾರುಗಳಿಗೆ ಹುಲ್ಲುಮೇಯಲು ಅದೇ ಗ್ರಾಮದಲ್ಲಿ/ಇತರೆ ಗ್ರಾಮಗಳಲ್ಲಿ ನಿಯಮಾನುಸಾರ ಅಷ್ಟೇ ವಿಸ್ತೀರ್ಣದ 34.06 ಎಕರೆ ಇತರೆ ಪರ್ಯಾಯ ಸರ್ಕಾರಿ ಜಮೀನು ಕಾಯ್ದಿರಿಸುವ ಷರತ್ತಿಗೊಳಪಟ್ಟು ಟ್ರೈಬಲ್ ಪಾರ್ಕ್ ಸ್ಥಾಪಿಸಲು ಕರ್ನಾಟಕ ತಾಂಡ ಅಭಿವೃದ್ಧಿ ನಿಗಮ ನಿಯಮಿತ, ಇವರಿಗೆ ಮಂಜೂರು ಮಾಡಲು ಪ್ರಾದೇಶಿಕ ಆಯುಕ್ತರು, ಕಲಬುರಗಿ ವಿಭಾಗ, ಕಲಬುರಗಿ ಇವರು ಶಿಫಾರಸ್ಸು ಮಾಡಿರುತ್ತಾರೆ.

ಕರ್ನಾಟಕ ತಾಂಡ ಅಭಿವೃದ್ಧಿ ನಿಗಮ ನಿಯಮಿತ ಬೆಂಗಳೂರು, ಇವರ ವರದಿಯಲ್ಲಿ ಹುಮನಾಬಾದ್ ತಾಲ್ಲೂಕು, ಲಾಲ್ ದಾರಿ ಪ್ರದೇಶದ ವ್ಯಾಪ್ತಿಯಲ್ಲಿ ಕರ್ನಾಟಕ ತಾಂಡ ಅಭಿವೃದ್ಧಿ ನಿಗಮದಿಂದ ಬಂಜಾರ ಜನಾಂಗದ ಸಾಂಪ್ರದಾಯಿಕ ಕಲೆ ಮತ್ತು ಸಂಸ್ಕೃತಿ ಅಭಿವೃದ್ಧಿ ವನವನ್ನು ಸ್ಥಾಪಿಸಲು ಯೋಜನೆ ರೂಪಿಸಿರುವುದಾಗಿ ತಿಳಿಸಿರುತ್ತಾರೆ. ಹಾಗೂ ಈ ವನದಲ್ಲಿ ಲಂಬಾಣಿ ಉಡುಪು ತಯಾರಕಾ ಘಟಕ, ಬಂಜಾರರ ವಿಶಿಷ್ಟ ಕಸೂತಿ ಕಲೆಯ ಕೌಶಲ್ಯ ರೂಢಿಸುವ ದೊಡ್ಡ ಪ್ರಮಾಣದ ತರಬೇತಿ ಕೇಂದ್ರಗಳ ನಿರ್ಮಾಣ, ಪ್ರೀಕಾಸ್ಟ್ ತಂತ್ರಜ್ಞಾನದ ಘಟಕ, ವಲಸೆ ಹೋಗುವ ಕುಟುಂಬದವರ ಮಕ್ಕಳಿಗೆ ಅರೆಕಾಲಿಕ ವಸತಿ, ಶಾಲೆ, ಬಂಜಾರರ ಸಂಸ್ಕೃತಿಯ ವಾದ್ಯ ಮತ್ತು ನೃತ್ಯ ಕಲೆಯ ಕಲಿಕಾ ಕೇಂದ್ರ ಹಾಗೂ ಮದ್ಯಪಾನ ವ್ಯಸನಿಗಳಿಗೆ ಚಿಕಿತ್ಸಾ ಘಟಕ ಇತ್ಯಾದಿ ಯೋಜನೆಗಳನ್ನು ಅನುಷ್ಠಾನಗೊಳಿಸುವ ಕ್ರಿಯಾ ಯೋಜನೆ ರೂಪಿಸಲಾಗುತ್ತಿದೆಯೆಂದು ತಿಳಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ, ಪ್ರಸ್ತಾಪಿತ ಜಮೀನನ್ನು ಮಾರ್ಗಸೂಚಿ ಬೆಲೆಯ ಶೇ. 50ರಷ್ಟನ್ನು ವಿಧಿಸಿ ಮಂಜೂರು ಮಾಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 19 ಎಲ್‌ಜಿಐ 2014, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್, 2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಬೀದರ್ ಜಿಲ್ಲೆ, ಹುಮನಾಬಾದ್ ತಾಲ್ಲೂಕಿನ ಬೋರಂಪಳ್ಳಿ ಗ್ರಾಮದ ಸ.ನಂ. 116ರಲ್ಲಿನ 34.06 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4)ರಡಿ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ, ಕರ್ನಾಟಕ ತಾಂಡಾ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರಿಗೆ "ಟ್ರೈಬಲ್ ಪಾರ್ಕ್" ಸ್ಥಾಪಿಸಲು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ)ರ ಪ್ರಕಾರ ಪ್ರಸ್ತಾಪಿತ ಜಮೀನಿನ ಮಾರ್ಗಸೂಚಿ ಬೆಲೆಯ ಶೇ. 50ರಷ್ಟನ್ನು ವಿಧಿಸಿ ಈ ಕೆಳಕಂಡ ಷರತ್ತುಗಳೊಂದಿಗೆ ಮಂಜೂರು ಮಾಡಿ ಆದೇಶಿಸಿದೆ.

**ಷರತ್ತುಗಳು :**

1. ಜಮೀನು ಹಸ್ತಾಂತರ ಪ್ರಕ್ರಿಯೆಯನ್ನು ಜಿಲ್ಲಾಧಿಕಾರಿ, ಬೀದರ್ ಜಿಲ್ಲೆ ಇವರು–ನಿಯಮಾನುಸಾರ ನಿರ್ವಹಿಸಲು ನಿರ್ದೇಶನ ನೀಡಿದೆ.
2. ಸಂಸ್ಥೆಯು ಗ್ರಾಮಸ್ಥರಿಗೆ ಅವಶ್ಯವಿರುವ ಕಡೆ ಪರ್ಯಾಯ ಸಂಪರ್ಕ ರಸ್ತೆಯನ್ನು ಕಲ್ಪಿಸಿಕೊಡತಕ್ಕದ್ದು.
3. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲಿ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು. ಹಾಗೂ ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
6. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
7. ಟ್ರೈಬಲ್ ಪಾರ್ಕ್ ಸ್ಥಾಪನೆಗಾಗಿ ಉಪಯೋಗಿಸುತ್ತಿರುವ ಗಾಯರಾಣ ಜಮೀನಿಗೆ ಬದಲಾಗಿ ಜಾನುವಾರುಗಳಿಗೆ ಹುಲ್ಲುಮೇಯಲು ಅದೇ ಗ್ರಾಮದಲ್ಲಿ/ಇತರೆ ಗ್ರಾಮಗಳಲ್ಲಿ ನಿಯಮಾನುಸಾರ ಅಷ್ಟೇ ವಿಸ್ತೀರ್ಣದ 34.06 ಎಕರೆ ಇತರೆ ಸರ್ಕಾರಿ ಜಮೀನನ್ನು ಕಾಯ್ದಿರಿಸುವುದು.
8. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ, ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಾಂತೇಗೌಡ ಎಸ್.ಎಲ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಮಂಜೂರಾತಿ–3)

**P.R. 40**
**SC - 25**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿನ ಗುಣ ಭರವಸೆ (Quality Assurance) ಅಧಿಕಾರಿಗಳ ಕಾರ್ಯನಿರ್ವಹಣೆ ಮತ್ತು ಹೊಣೆಗಾರಿಕೆ ಪರಿಷ್ಕರಣೆ ಕುರಿತು ಹೊರಡಿಸಿರುವ ಸರ್ಕಾರದ ಆದೇಶ ಸಂಖ್ಯೆ: : ಲೋಇ 137 ಸೇಇವಿ 2009, ದಿನಾಂಕ: 22–02–2010ನ್ನು ಪರಿಷ್ಕರಿಸುವ ಬಗ್ಗೆ–ಆದೇಶ

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಲೋಇ 137 ಸೇಇವಿ 2009, ದಿನಾಂಕ: 22–02–2010
2) ಸರ್ಕಾರದ ಆದೇಶ ಸಂಖ್ಯೆ: ಲೋಇ 99 ಸೇಇವಿ 2010, ದಿನಾಂಕ: 21–04–2010
3) ಮುಖ್ಯ ಇಂಜಿನಿಯರ್, ಸಂಕ(ದ), ಬೆಂಗಳೂರು ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ಬೆಂ:ಗುಣ ಭರವಸೆ: 2010–11, ದಿನಾಂಕ: 21–06–2010
4) ದಿನಾಂಕ: 07–06–2013ರಂದು ಕಾರ್ಯದರ್ಶಿಗಳು, ಲೋ. ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು
5) ದಿನಾಂಕ: 06–11–2013ರಂದು ಪ್ರಧಾನ ಕಾರ್ಯದರ್ಶಿಗಳು, ಲೋ. ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು

**ಪ್ರಸ್ತಾವನೆ:**

ಲೋಕೋಪಯೋಗಿ ಇಲಾಖೆಯಿಂದ ನಿರ್ವಹಿಸಲಾಗುತ್ತಿರುವ ಎಲ್ಲಾ ಕಾಮಗಾರಿಗಳನ್ನು ವಿಶಿಷ್ಟ ವಿವರಣೆಯಂತೆ ನಿಗದಿಪಡಿಸಿದ ಅಥವಾ ಟೆಂಡರು ನಿಯಮಗಳಂತೆ ನಿಗದಿತ ಕಾಲಾವಧಿಯೊಳಗಾಗಿ ಪ್ರತಿಯೊಂದು ಹಂತದಲ್ಲಿಯೂ ಗುಣಮಟ್ಟದ ಕಾಮಗಾರಿಯನ್ನು ನಿರ್ವಹಿಸಲು ಗುತ್ತಿಗೆದಾರರು, ನಿರ್ಮಾಣ ಉಸ್ತುವಾರಿ ಇಂಜಿನಿಯರುಗಳು ಮತ್ತು ಗುಣ ಭರವಸೆ ಇಂಜಿನಿಯರುಗಳ ಪೂರ್ಣ ಪ್ರಮಾಣದಲ್ಲಿ ತೊಡಗುವಿಕೆಯಿಂದ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಹಿಂದೆ ಅಸ್ತಿತ್ವದಲ್ಲಿದ್ದ ಗುಣ ನಿಯಂತ್ರಣ ಅಧಿಕಾರಿಗಳು, ಕಛೇರಿ ಮತ್ತು ಇತ್ಯಾದಿ ಹೆಸರುಗಳನ್ನು ಗುಣಭರವಸೆ ಎಂದು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪುನರ್‌ನಾಮಾಂಕಿತಗೊಳಿಸಲಾಗಿರುತ್ತದೆ. ಈ ಆದೇಶದಲ್ಲಿ ವಿವಿಧ ಕಾಮಗಾರಿಗಳ ಗುಣಮಟ್ಟವನ್ನು

ವ್ಯವಸ್ಥಿತವಾಗಿ ಮತ್ತು ಜವಾಬ್ದಾರಿಯುತವಾಗಿ ನಿರ್ವಹಿಸುವ ನಿಟ್ಟಿನಲ್ಲಿ ಗುಣ ಭರವಸೆ ವ್ಯವಸ್ಥೆಯ ವಿವಿಧ ಹಂತದ ಅಧಿಕಾರಿಗಳಿಗೆ ಹೊಣೆಗಾರಿಕೆಯನ್ನು ನಿಗದಿಪಡಿಸಲಾಗಿರುತ್ತದೆ.

ದಿನಾಂಕ: 22-02-2010ರ ಆದೇಶದ ಬಗ್ಗೆ ಮುಖ್ಯ ಇಂಜಿನಿಯರ್, ಸಂಕ(ದ), ಬೆಂಗಳೂರು ಮತ್ತು ಸಂಕ(ಉ), ಧಾರವಾಡ ರವರಿಗೆ ವಿವಿಧ ಗುಣ ಭರವಸೆ ವಿಭಾಗಗಳಿಂದ ಹಲವಾರು ಆಕ್ಷೇಪಣೆಗಳು ಬಂದಿದ್ದು, ಸದರಿ ಆಕ್ಷೇಪಣೆಗಳಲ್ಲಿ ಪ್ರಸ್ತುತ ಲಭ್ಯವಿರುವ ಸಿಬ್ಬಂದಿ ಮತ್ತು ಸೌಲಭ್ಯಗಳಿಂದ ದಿನಾಂಕ: 22-02-2010ರಲ್ಲಿ ನೀಡಿರುವ ನಿರ್ದೇಶನದನ್ವಯ ಗುಣ ಭರವಸೆಯನ್ನು ನಿರ್ವಹಿಸುವುದು ಕಷ್ಟಸಾಧ್ಯವೆಂದು ತಿಳಿಸಿರುವುದರಿಂದ, ಇಲಾಖಾ ಮುಖ್ಯಸ್ಥರುಗಳು ಸದರಿ ಆದೇಶವನ್ನು ಹಿಂದಕ್ಕೆ ಪಡೆಯುವಂತೆ ಸರ್ಕಾರವನ್ನು ಕೋರಿದ್ದರು. ಈ ಅಂಶಗಳನ್ನು ಪರಿಶೀಲಿಸಲು ಸರ್ಕಾರದ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 15-04-2010ರಂದು ಸಭೆ ಜರುಗಿ ಸದರಿ ಸಭೆಯಲ್ಲಿ ಈ ಬಗ್ಗೆ ಸುಧೀರ್ಘವಾಗಿ ಚರ್ಚಿಸಿ, ಲೋಕೋಪಯೋಗಿ ಇಲಾಖೆಯಲ್ಲಿ ಕಾರ್ಯನಿರ್ವಹಿಸುವ ಪ್ರತಿ ಕಾಮಗಾರಿಯ ಬಗ್ಗೆ ಗುಣ ಭರವಸೆಯನ್ನು ಗುತ್ತಿಗೆದಾರರಿಂದ ಉಸ್ತುವಾರಿ ಇಂಜಿನಿಯರುಗಳಿಂದ ಹಾಗೂ ಗುಣ ನಿಯಂತ್ರಣ ಇಂಜಿನಿಯರುಗಳಿಂದ ಸಂಯೋಜಕವಾಗಿ ನಿರ್ಧರಿಸುವುದು ಸೂಕ್ತವೆಂದು ತೀರ್ಮಾನಿಸಿ, ಈ ಬಗ್ಗೆ ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳು, ಮ್ಯಾನುಯೆಲ್ ದಿನಾಂಕ: 22-02-2010ರ ಆದೇಶವನ್ನು ಪರಿಶೀಲಿಸಿ ಒಂದು ರಚನಾತ್ಮಕ ವರದಿಯನ್ನು ತಯಾರಿಸಲು ಮುಖ್ಯ ಇಂಜಿನಿಯರ್, ಸಂಕ(ದ), ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಒಂದು ಸಮಿತಿಯನ್ನು ರಚಿಸಿ ಈ ಕೆಳಕಂಡ ಅಂಶಗಳ ಬಗ್ಗೆ ಪರಿಶೀಲಿಸಿ ವರದಿ ನೀಡುವಂತೆ ಸೂಚಿಸಲಾಗಿತ್ತು.

1. ಗುಣ ಭರವಸೆ ಮ್ಯಾನುಯೆಲ್ ಹಾಗೂ ನೆರೆರಾಜ್ಯಗಳ ಲೋಕೋಪಯೋಗಿ ಇಲಾಖೆಗಳಲ್ಲಿನ ಗುಣ ಭರವಸೆ ವ್ಯವಸ್ಥೆ ಕುರಿತು
2. ದಿನಾಂಕ: 22-02-2010ರ ಸರ್ಕಾರದ ಆದೇಶವನ್ನು ಅನುಷ್ಠಾನಗೊಳಿಸುವ ಬಗ್ಗೆ
3. ಗುಣ ಭರವಸೆ ಬಗ್ಗೆ ಗುಣ ಭರವಸೆ ಅಧಿಕಾರಿಗಳ ಜವಾಬ್ದಾರಿ ಕುರಿತು
4. ಗುಣ ಭರವಸೆ ಬಗ್ಗೆ ಗುತ್ತಿಗೆದಾರರ ಜವಾಬ್ದಾರಿ ಕುರಿತು
5. ಕಾಮಗಾರಿ ಗುಣಮಟ್ಟದ ಕುರಿತು ವಿವಿಧ ಮಟ್ಟದ ಅಧಿಕಾರಿಗಳ ಜವಾಬ್ದಾರಿ ಬಗ್ಗೆ ಅಳತೆಗೋಲುಗಳನ್ನು ಸೂಚಿಸುವುದು
6. ಸೂಕ್ತವೆನಿಸುವ ಇನ್ನಿತರೆ ಅಂಶಗಳು

ಮುಖ್ಯ ಇಂಜಿನಿಯರ್, ಸಂಕ(ದ), ಬೆಂಗಳೂರು ಇವರು ಸರ್ಕಾರದ ಆದೇಶ ಸಂಖ್ಯೆ: ಲೋಇ 99 ಸೇಇವಿ 2010, ದಿನಾಂಕ: 21-04-2010ರಲ್ಲಿ ಸೂಚಿಸಿರುವಂತೆ ಮುಖ್ಯ ಇಂಜಿನಿಯರ್‌ರವರು ಮೇಲಿನ 6 ಅಂಶಗಳ ಬಗ್ಗೆ ಪರಿಶೀಲಿಸಿ ಅಂದರೆ ಪ್ರತಿಯೊಂದು ಅಂಶದ ಬಗ್ಗೆ ಸುಧೀರ್ಘವಾಗಿ ಹಾಗೂ ಕೂಲಂಕಷವಾಗಿ ಚರ್ಚಿಸಿ ಸಮಿತಿಯ ಅಂತಿಮ ಸಭೆಯಲ್ಲಿ ತೆಗೆದುಕೊಂಡ ನಿರ್ಣಯಗಳನ್ನು ಆಧರಿಸಿ ವರದಿಯನ್ನು ತಯಾರಿಸಿ ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಪತ್ರದೊಂದಿಗೆ ಸರ್ಕಾರಕ್ಕೆ ಸಲ್ಲಿಸಿದ್ದರು.

ಸದರಿ ಸಮಿತಿಯು ಸಲ್ಲಿಸಿರುವ ವರದಿಯ ಬಗ್ಗೆ ಚರ್ಚಿಸಲು ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಸಭೆಗಳನ್ನು ನಡೆಸಿ, ದಿನಾಂಕ: 07-06-2013ರಂದು ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ: 06-11-2013ರಂದು ಸಭೆಗಳನ್ನು ನಡೆಸಿ ಸರ್ಕಾರದ ಆದೇಶ ಸಂಖ್ಯೆ: ಲೋಇ 137 ಸೇಇವಿ 2010, ದಿನಾಂಕ: 22-02-2010ನ್ನು ಕಾರ್ಯಗತಗೊಳಿಸುವಲ್ಲಿ ಇರುವ ಸಾಧಕ ಭಾದಕಗಳ ಬಗ್ಗೆ ಸುಧೀರ್ಘವಾಗಿ ಚರ್ಚಿಸಿ ಲೋಕೋಪಯೋಗಿ ಇಲಾಖೆಯಿಂದ ನಿರ್ವಹಿಸಿರುವ ಪ್ರತಿ ಕಾಮಗಾರಿಯ ಬಗ್ಗೆ ಗುಣ ಭರವಸೆಯನ್ನು ಗುತ್ತಿಗೆದಾರರಿಂದ, ಉಸ್ತುವಾರಿ ಇಂಜಿನಿಯರುಗಳಿಂದ, ಹಾಗೂ ಗುಣ ಭರವಸೆ ಇಂಜಿನಿಯರುಗಳಿಂದ ಸಂಯೋಜಿತವಾಗಿ ನಿಗದಿಪಡಿಸುವುದು ಹಾಗೂ ನಿರ್ಧರಿಸುವುದು ಸೂಕ್ತವೆಂದು ತೀರ್ಮಾನಿಸಿ ಈ ಬಗ್ಗೆ ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳು, ಮ್ಯಾನುಯೆಲ್ ಮತ್ತು ದಿನಾಂಕ: 22-02-2010ರ ಸರ್ಕಾರಿ ಆದೇಶ ಇವುಗಳನ್ನು ಸಮಗ್ರವಾಗಿ ಪರಿಶೀಲಿಸಿ ಜವಾಬ್ದಾರಿ ನಿಗದಿಪಡಿಸುವ ಬಗ್ಗೆ ಮುಖ್ಯ ಇಂಜಿನಿಯರ್, ಸಂಕ(ದ), ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ ರಚಿಸಲಾಗಿದ್ದ ಸಮಿತಿಯು ದಿನಾಂಕ: 21-06-2010ರಂದು ನೀಡಿರುವ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಚರ್ಚಿಸಿ ಪ್ರಾಯೋಗಿಕ ಅಗತ್ಯಕ್ಕೆ ತಕ್ಕಂತೆ ದಿನಾಂಕ: 22-02-2010ರ ಆದೇಶದಲ್ಲಿ ಕೆಲವೊಂದು ಅಂಶಗಳನ್ನು ಹೊಸದಾಗಿ ಸೇರಿಸಿ, ಕೆಲವೊಂದು ಅಂಶಗಳಿಗೆ ತಿದ್ದುಪಡಿ ಮಾಡಿ ಸದರಿ ಆದೇಶವನ್ನು ಪರಿಷ್ಕರಿಸಲು ತೀರ್ಮಾನಿಸಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರದ ಆದೇಶ ಸಂಖ್ಯೆ: ಲೋಇ 137 ಸೇಇವಿ 2009 ದಿನಾಂಕ: 22-02-2010ರ ಆದೇಶವನ್ನು ಪರಿಷ್ಕರಿಸಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 243 ಸೇಇವಿ 2013, ಬೆಂಗಳೂರು, ದಿನಾಂಕ: 22ನೇ ಜುಲೈ, 2014**

ಲೋಕೋಪಯೋಗಿ ಇಲಾಖೆಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಗುಣ ನಿಯಂತ್ರಣ (QUALITY CONTROL) ಅಧಿಕಾರಿಗಳು/ಕಛೇರಿ ಇತ್ಯಾದಿಗಳ ಹೆಸರನ್ನು ಗುಣ ಭರವಸೆ (QUALITY ASSURANCE) ಎಂದು ಸರ್ಕಾರದ ಆದೇಶ ಸಂಖ್ಯೆ: ಲೋಇ 137 ಸೇಇವಿ 2009, ದಿನಾಂಕ: 22-02-2010ರಲ್ಲಿ ಪುನರ್‌ನಾಮಾಂಕಿತಗೊಳಿಸಿ ಸಂಬಂಧಿಸಿದ ಅಧಿಕಾರಿಗಳಿಗೆ ನಿಗದಿಗೊಳಿಸಿರುವ ಜವಾಬ್ದಾರಿ ಮತ್ತು ಹೊಣೆಗಾರಿಕೆಯನ್ನು ಪುನರ್‌ಪರಿಶೀಲಿಸಿ ಈ ಕೆಳಕಂಡಂತೆ ಪರಿಷ್ಕರಿಸಿದೆ.

**(I) ಗುಣ ಭರವಸೆ ಅಧಿಕಾರಿಗಳ ಕರ್ತವ್ಯ ಹಾಗೂ ಜವಾಬ್ದಾರಿಗಳು**

**(1) ಅಧೀಕ್ಷಕ ಇಂಜಿನಿಯರ್, ಗುಣ ಭರವಸೆ ವೃತ್ತ**

1) ಅಧೀಕ್ಷಕ ಇಂಜಿನಿಯರ್, ಗುಣ ಭರವಸೆ ವೃತ್ತ ಇವರು ಸಂಬಂಧಪಟ್ಟ ವಲಯದ ಮುಖ್ಯ ಇಂಜಿನಿಯರ್‌ರವರ ಅಧೀನದಲ್ಲಿ ಮತ್ತು ಮಾರ್ಗದರ್ಶನದಲ್ಲಿ ಕಾರ್ಯಭಾರ ನಿರ್ವಹಿಸುವುದು.

2) ಇವರ ಕಾರ್ಯವ್ಯಾಪ್ತಿಯು ಆಯಾ ವಲಯದ ಭೌಗೋಳಿಕ ಪ್ರದೇಶದ ವ್ಯಾಪ್ತಿಯಲ್ಲಿ ಲೋಕೋಪಯೋಗಿ ಇಲಾಖೆಯು ಕೈಗೊಳ್ಳುವ ರಸ್ತೆ, ಸೇತುವೆ, ಕಟ್ಟಡ ಇತ್ಯಾದಿ ಕಾಮಗಾರಿಗಳ ನಿರ್ಮಾಣವು ನಿಗದಿತ ಗುಣಮಟ್ಟಕ್ಕೆ ಪೂರಕವಾಗುವಂತೆ ಅನುಮೋದಿತ ಅಂದಾಜು ಪಟ್ಟಿ, ಗುತ್ತಿಗೆ ಕರಾರಿನಲ್ಲಿ ವಿಶಿಷ್ಟ ವಿವರಣೆಗಳನ್ವಯ ಮತ್ತು BIS, IRC, NBC, IBC ಹಾಗೂ ಇತರೆ ಮನ್ನಣೆ ಪಡೆದ ಮಾನಕ ಸಂಸ್ಥೆಗಳು ನಿಗದಿಪಡಿಸಿರುವ ಸಂಹಿತೆಗಳು : ಗುಣ ಭರವಸೆ ಮ್ಯಾನುಯೆಲ್ ಅನ್ವಯ ಬಳಸಲಾಗುವ ಕಚ್ಚಾ ಸಾಮಗ್ರಿಗಳ ಗುಣಮಟ್ಟ ಹಾಗೂ ನಿರ್ಮಾಣ ಕಾರ್ಯವಿಧಾನಗಳ

ಬಗ್ಗೆ ಆಯ್ದ ರೀತಿಯಲ್ಲಿ (Ramdam Base) ಪರಿಶೀಲನೆ ನಡೆಸುವ ಹಾಗೂ ತಾಂತ್ರಿಕ ಸಲಹೆ, ಸೂಚನೆ, ಮಾರ್ಗದರ್ಶನ ನೀಡುವ ಜವಾಬ್ದಾರಿಯನ್ನು ಹೊಂದಿರುತ್ತಾರೆ.

3) ತಮ್ಮ ಕಾರ್ಯವ್ಯಾಪ್ತಿಯಲ್ಲಿ ಬರುವ ಕಾರ್ಯಪಾಲಕ ಇಂಜಿನಿಯರು ಹಾಗೂ ಸಹಾಯಕ ಕಾರ್ಯಪಾಲಕ ಇಂಜಿನಿಯರುಗಳ ಸಭೆಯನ್ನು ಪ್ರತಿ ತಿಂಗಳು ಕಡ್ಡಾಯವಾಗಿ ನಡೆಸಿ ಕಾಮಗಾರಿಗಳ ಗುಣಮಟ್ಟ ವರ್ಧನೆಗೆ ಅಳವಡಿಸಲಾಗುತ್ತಿರುವ ಕ್ರಮಗಳ ಬಗ್ಗೆ ಪರಿಶೀಲಿಸುವುದು.

4) ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವ್ಯಾಪ್ತಿಯಲ್ಲಿ ನಿರ್ವಹಿಸಲಾಗುವ ಬಂದರು ಮತ್ತು ಒಳನಾಡು ಜಲಸಾರಿಗೆ ನಿರ್ದೇಶನಾಲಯ ಕಾಮಗಾರಿಗಳ ಗುಣ ಭರವಸೆ ಬಗ್ಗೆ ಮೇಲ್ವಿಚಾರಣೆ ಮತ್ತು ಪರಿಶೀಲನೆಯನ್ನು (Random) ಆಧಾರದ ಮೇಲೆ ಕೈಗೊಳ್ಳುವ ಜವಾಬ್ದಾರಿಯನ್ನು ಹೊಂದಿರುತ್ತಾರೆ.

5) ತಾವು ಪರಿವೀಕ್ಷಣೆ ನಡೆಸಿದ ಬಗ್ಗೆ ತಾಂತ್ರಿಕ ಟಿಪ್ಪಣಿಗಳ ಪ್ರತಿಗಳನ್ನು ಸರ್ಕಾರಕ್ಕೆ ಹಾಗೂ ಮುಖ್ಯ ಇಂಜಿನಿಯರ್‌ರವರಿಗೆ ಸಲ್ಲಿಸುವುದರೊಂದಿಗೆ ಗುಣ ಭರವಸೆ ಘಟಕದ ಕಾರ್ಯಪಾಲಕ ಇಂಜಿನಿಯರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಮತ್ತು ಸಂಬಂಧಪಟ್ಟ ಕಾಮಗಾರಿ ವೃತ್ತದಲ್ಲಿನ ಅಧೀಕ್ಷಕ ಇಂಜಿನಿಯರ್, ಕಾರ್ಯಪಾಲಕ ಇಂಜಿನಿಯರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಕಛೇರಿಗೆ ಸಲ್ಲಿಸುವುದು.

6) ತಮ್ಮ ಪರಿವೀಕ್ಷಣೆ ಸಮಯದಲ್ಲಿ ನಿರ್ವಹಿಸಲಾದ ಕಾಮಗಾರಿ ಅಂಶಗಳಲ್ಲಿನ ನ್ಯೂನತೆಗಳನ್ನು ಗಮನಿಸಿದ ಸಂದರ್ಭಗಳಲ್ಲಿ ತಾಂತ್ರಿಕ ಸಮರ್ಪಕತೆಯಲ್ಲಿ ಅವುಗಳನ್ನು ಸರಿಪಡಿಸಲು ಅಥವಾ ಮರುನಿರ್ವಹಿಸಲು ಸೂಚಿಸುವುದರೊಂದಿಗೆ ಸಂಬಂಧಪಟ್ಟ ನಿರ್ಮಾಣ ಘಟಕದ ಇಂಜಿನಿಯರುಗಳು ಸೂಕ್ತ ಕ್ರಮ ಕೈಗೊಂಡಿರುವ ಬಗ್ಗೆ ಆಯಾ ನಿರ್ಮಾಣ ವಿಭಾಗಗಳ ಕಾರ್ಯಪಾಲಕ ಇಂಜಿನಿಯರುಗಳು ಸಲ್ಲಿಸಲಾದ ಪೂರಕ ದಾಖಲೆಗಳನ್ನೊಳಗೊಂಡ ಪಾಲನಾ ವರದಿಗಳು ಸಮಂಜಸವಾಗಿರುವ ಬಗ್ಗೆ ಪರಿಶೀಲಿಸಲಾಗುವುದು.

7) ತಮ್ಮ ಕಾರ್ಯವ್ಯಾಪ್ತಿಯಲ್ಲಿ ಗುಣ ಭರವಸೆ ಪ್ರಕ್ರಿಯೆಯನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಉಪ ವಿಭಾಗದ ಮಟ್ಟದಲ್ಲಿರುವ ಆಡಳಿತಾತ್ಮಕ ಹಾಗೂ ತಾಂತ್ರಿಕ ಅಡಚಣೆಗಳ ನಿವಾರಣೆಗಾಗಿ ಮೇಲಾಧಿಕಾರಿಗಳ ಸಹಮತಿಯೊಂದಿಗೆ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸಲು ಪ್ರಾಧಾನ್ಯತೆ ನೀಡುವುದು. ಗುಣ ಭರವಸೆ ಇಂಜಿನಿಯರುಗಳನ್ನು ತಾಂತ್ರಿಕ ಜ್ಞಾನಾಭಿವೃದ್ಧಿಗಾಗಿ ನಿಯಮಿತವಾದ ತರಬೇತಿ ಕಾರ್ಯಾಗಾರಗಳಿಗೆ ಕಡ್ಡಾಯವಾಗಿ ನಿಯೋಜಿಸಲು ಸೂಕ್ತ ಯೋಜನೆ ಸಿದ್ಧಪಡಿಸಿ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಅನುಷ್ಠಾನಗೊಳಿಸತಕ್ಕದ್ದು. ಪ್ರತಿ ಮಾಸಿಕ ಸಭೆಯ ನಡವಳಿಯ ಪ್ರತಿಯನ್ನು ಮುಖ್ಯ ಇಂಜಿನಿಯರ್ ಹಾಗೂ ಸರ್ಕಾರಕ್ಕೆ ಸಲ್ಲಿಸುವುದು.

8) ಮುಖ್ಯ ಇಂಜಿನಿರ್‌ರವರ ಮಟ್ಟದಲ್ಲಿ ನಡೆಯುವ ಮಾಸಿಕ ಪ್ರಗತಿ ಪರಿಶೀಲನೆ ಸಭೆಯಲ್ಲಿ ಭಾಗವಹಿಸಿ ವಲಯದ ವ್ಯಾಪ್ತಿಯಲ್ಲಿ ನಡೆಯುತ್ತಿರುವ ಕಾಮಗಾರಿಗಳ ಗುಣಮಟ್ಟ ಭರವಸೆ ಬಗ್ಗೆ ಮಾಹಿತಿಯನ್ನು ಒದಗಿಸತಕ್ಕದ್ದು ಮತ್ತು ಗುಣ ಭರವಸೆ ಅಧಿಕಾರಿಗಳ ಪರಿವೀಕ್ಷಣಾ ಟಿಪ್ಪಣಿಗಳಿಗೆ ಬಾಕಿ ಇರುವ ಪಾಲನಾ ವರದಿಗಳ ಬಗ್ಗೆ ಮುಖ್ಯ ಇಂಜಿನಿಯರ್‌ರವರ ಗಮನಕ್ಕೆ ತರತಕ್ಕದ್ದು.

9) ಆಯ್ದ ಆರ್‌ಎಂಸಿ/ಹಾಟ್‌ಮಿಕ್ಸ್ ಪ್ಲಾಂಟ್‌ಗಳನ್ನು ಖುದ್ದು ಸಂಪರ್ಕಿಸಿ, ಜಲ್ಲಿ ಸಿಮೆಂಟ್, ಮರಳು ಬಳಸುವ ನೀರು ಮತ್ತು ಡಾಂಬರನ್ನು ಪರಿಶೀಲಿಸಿ, ಪರಿಮಾಣ ಮತ್ತು ಗುಣಮಟ್ಟದ ಬಗ್ಗೆ ಸೂಕ್ತ ನಿರ್ದೇಶನ ನೀಡತಕ್ಕದ್ದು.

10) ತಮ್ಮ ಕಾರ್ಯವ್ಯಾಪ್ತಿಯಲ್ಲಿ ಪ್ರಗತಿಯಲ್ಲಿರುವ ಪ್ರಮುಖ ಕಾಮಗಾರಿಗಳನ್ನು ಪ್ರಾಧಾನ್ಯತೆ ಹಾಗೂ ಅಂದಾಜು ಮೊತ್ತದ ಆಧಾರದ ಮೇಲೆ ಸ್ವಯಂ–ಆಯ್ಕೆ ಮಾಡಿಕೊಂಡು ಪರಿವೀಕ್ಷಣೆ ನಡೆಸುವ ಗುರಿ ಹೊಂದಬೇಕಿದ್ದು, ಪ್ರತಿ ಮಾಸಿಕದಲ್ಲಿ ಪರಿವೀಕ್ಷಣೆಗೊಳಪಡಿಸುವ ಅಂತಹ ಕಾಮಗಾರಿಗಳ ಒಟ್ಟು ಸಂಖ್ಯೆಯು ಆಯಾ ಆರ್ಥಿಕ ವರ್ಷದಲ್ಲಿ ಮಾಸಿಕ ಸರಾಸರಿ 20 ಕ್ಕಿಂತ ಕಡಿಮೆ ಇರತಕ್ಕದ್ದಲ್ಲ, ಸ್ಥಾನಿಕ ಪ್ರಯೋಗಾಲಯಗಳಲ್ಲಿ ನಿರ್ಮಾಣ ಘಟಕದ ಇಂಜಿನಿಯರುಗಳು, ಮಾನಕ/ಸಂಸ್ಥೆಗಳು/ಗುಣಭರವಸೆ ಮ್ಯಾನುಯಲ್ ಅನ್ವಯ ನಿಗದಿಪಡಿಸಿದ ಅವರ್ತನಕ್ಕನುಗುಣವಾಗಿ ಪೂರ್ಣ ಪ್ರಮಾಣದಲ್ಲಿ ಪರೀಕ್ಷೆಗಳನ್ನು ಕೈಗೊಂಡು ನಿಗದಿತ ವಹಿಗಳಲ್ಲಿ ದಾಖಲಿಸಿರುವ ಬಗ್ಗೆ ಪರಿವೀಕ್ಷಣೆ ಸಮಯದಲ್ಲಿ ಪರಿಶೀಲಿಸತಕ್ಕದ್ದು.

11) ನಿರ್ಮಾಣ ಘಟಕದ ಕಾರ್ಯನಿರ್ವಾಹಕ ಇಂಜಿನಿಯರವರು ಸಲ್ಲಿಸಲಾದ ರೂ. 5.00 ಕೋಟಿಗಿಂತ ಹೆಚ್ಚಿನ ಮೊತ್ತದ ಕಾಮಗಾರಿಗಳ ಗುಣಭರವಸೆ ಯೋಜನೆ/ಕಾರ್ಯಕ್ರಮಗಳನ್ನು ಪರಿಶೀಲಿಸಿ ಅನುಮೋದಿಸುವ ಜವಾಬ್ದಾರಿ ಹೊಂದಿರುತ್ತಾರೆ.

12) ತಮ್ಮ ಕಾರ್ಯವ್ಯಾಪ್ತಿಯಲ್ಲಿನ ರೂ. 5.00 (ಐದು) ಕೋಟಿಗಿಂತ ಹೆಚ್ಚಿನ ಅಂದಾಜು ಮೊತ್ತದ ಕಾಮಗಾರಿಗಳಿಗೆ (ನಿರ್ವಹಣಾ ಕಾಮಗಾರಿಗಳನ್ನು ಹೊರತುಪಡಿಸಿ) ಅಂತಿಮ ಬಿಲ್ಲನ್ನು ಪರಿಗಣಿಸುವಲ್ಲಿ ಸಂಬಂಧಪಟ್ಟ ನಿರ್ಮಾಣ ಘಟಕದ ಕಾರ್ಯಪಾಲಕ ಇಂಜಿನಿಯರುಗಳು ಅಂತಹ ಕಾಮಗಾರಿಗಳಲ್ಲಿ ಸಮಯೋಚಿತವಾಗಿ ಗುಣಮಟ್ಟದ ಸಾಮಗ್ರಿಗಳನ್ನು ಬಳಸಿ ಸ್ಥಾಪಿತ ನಿರ್ಮಾಣ ಪದ್ಧತಿಗಳಂತೆ ನಿರ್ವಹಿಸಿರುವ ಬಗ್ಗೆ ದೃಢಿಕರಿಸಿ, ಅಳತೆಗಳ ಪರಿಶೀಲನೆಯನ್ನು ಕಡ್ಡಾಯವಾಗಿ ಕೈಗೊಂಡ ನಂತರ ನಿರಾಕ್ಷೇಪಣಾ ಪತ್ರ ನೀಡಲು ಗುಣಭರವಸೆ ಘಟಕದ ಕೋರಿಕೆಯನ್ನು ಸಲ್ಲಿಸತಕ್ಕದ್ದು. ಸದರಿ ಕೋರಿಕೆಯನ್ನು ಆಧರಿಸಿ, ಸೂಕ್ತ ಪರಿಶೀಲನೆ ನಂತರ ನಿರಾಕ್ಷೇಪಣಾ ಪತ್ರವನ್ನು ಗುಣಭರವಸೆ ಘಟಕದಿಂದ ನೀಡತಕ್ಕದ್ದು. ಅಂತಿಮ ಬಿಲ್ಲು ಪಾವತಿ ಬಗ್ಗೆ ಅಭಿಪ್ರಾಯ ನೀಡತಕ್ಕದ್ದು.

13) ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಗಳ ವ್ಯಾಪ್ತಿಯಲ್ಲಿನ ಅಥವಾ ಕಾಮಗಾರಿಗಳ ಗುಣಭರವಸೆಗಾಗಿ ಸಮಾಲೋಚಕರನ್ನು ನೇಮಿಸಿದ್ದರೂ/ನೇಮಿಸದಿದ್ದರೂ ಸಹ ಸರ್ಕಾರದಿಂದ ನಿರ್ದೇಶಿಸಲ್ಪಟ್ಟ ಯಾವುದೇ ಕಾಮಗಾರಿ/ಯೋಜನೆಯಡಿಯಲ್ಲಿನ ಸದರಿ ಕಾಮಗಾರಿಗಳ ಗುಣಮಟ್ಟದ ಬಗ್ಗೆ ಅಗತ್ಯವಿದ್ದಲ್ಲಿ ಆಯ್ದ ರೀತಿಯಲ್ಲಿ (ರ್‍ಯಾಂಡಂ ಆಧಾರದಲ್ಲಿ) ಮೇಲುಸ್ತುವಾರಿ ನಡೆಸತಕ್ಕದ್ದು.

**(II) ಕಾರ್ಯಪಾಲಕ ಇಂಜಿನಿಯರ್, ಗುಣ ಭರವಸೆ ವಿಭಾಗ :**

1) ಗುಣ ಭರವಸೆ ವೃತ್ತದ ಅಧೀಕ್ಷಕ ಇಂಜಿನಿಯರ್ ಅವರ ಅಧೀನದಲ್ಲಿ ಮತ್ತು ಮಾರ್ಗದರ್ಶನದಲ್ಲಿ ಕಾರ್ಯಭಾರ ನಿರ್ವಹಿಸುವುದು.

2) ತಮ್ಮ ಕಾರ್ಯವ್ಯಾಪ್ತಿಯಲ್ಲಿ ಲೋಕೋಪಯೋಗಿ ಇಲಾಖೆಯು ಕೈಗೊಳ್ಳುವ ರಸ್ತೆ, ಸೇತುವೆ, ಕಟ್ಟಡ ಇತ್ಯಾದಿ ಕಾಮಗಾರಿಗಳ ನಿರ್ಮಾಣವು ನಿಗದಿತ ಗುಣಮಟ್ಟಕ್ಕೆ ಪೂರಕವಾಗುವಂತೆ ಅನುಮೋದಿತ ಅಂದಾಜು ಪಟ್ಟಿ/ಗುತ್ತಿಗೆ ಕರಾರಿನಲ್ಲಿ ವಿಶಿಷ್ಟ ವಿವರಣೆ ಅನುಸಾರ ಬಳಸಲಾಗುವ

ಸಾಮಗ್ರಿಗಳ ಗುಣಮಟ್ಟ ಹಾಗೂ ನಿರ್ಮಾಣ ಕಾರ್ಯವಿಧಾನಗಳ ಬಗ್ಗೆ ರ್‍ಯಾಂಡಂ ಆಧಾರದಲ್ಲಿ ಪರಿಶೀಲನೆ ನಡೆಸುವ ಹಾಗೂ ತಾಂತ್ರಿಕ ಸಲಹೆ, ಸೂಚನೆ, ಮಾರ್ಗದರ್ಶನ ನೀಡುವ ಜವಾಬ್ದಾರಿಯನ್ನು ಹೊಂದಿರುತ್ತಾರೆ.

3) ಪರಿವೀಕ್ಷಣಾ ಸಮಯದಲ್ಲಿ ಕಾಮಗಾರಿಗಳಲ್ಲಿ ಉಪಯೋಗಿಸಲ್ಪಡುವ ಕಚ್ಚಾ ಸಾಮಗ್ರಿಗಳ ಗುಣಮಟ್ಟ ಪರೀಕ್ಷೆಗಳಲ್ಲಿ ಅಗತ್ಯವಿದ್ದಲ್ಲಿ, ಗುಣ ಭರವಸೆ ಉಪ-ವಿಭಾಗದ ಸಹಾಯದೊಂದಿಗೆ Bureau of Indian Standards Indian Roads Congress, National Building Code, Indian Building Congress ಮತ್ತು ಇತರೆ ಅಧಿಕೃತ ಮಾನಕ ಸಂಸ್ಥೆಗಳ ಸಂಹಿತೆಗಳಲ್ಲಿ : ಗುಣ ಭರವಸೆ ಕೈಪಿಡಿ ಅನ್ವಯ ನಿಗದಿಪಡಿಸಿರುವಂತೆ ರ್‍ಯಾಂಡಂ ಆಧಾರದಲ್ಲಿ ನಡೆಸಿ ಕಾಮಗಾರಿಗಳ ಗುಣಮಟ್ಟ ವರ್ಧನೆಗೆ ಪೂರಕ ಕ್ರಮ ವಹಿಸುವುದು.

4) ತಮ್ಮ ಅಧೀನದಲ್ಲಿರುವ ಗುಣ ಭರವಸೆ ಸಹಾಯಕ ಕಾರ್ಯಪಾಲಕ ಇಂಜಿನಿಯರು ತಮ್ಮ ಉಪ-ವಿಭಾಗ ವ್ಯಾಪ್ತಿಯಲ್ಲಿ ಲಭ್ಯವಿರುವ ಮೂಲಭೂತ ಸೌಕರ್ಯಗಳನ್ನು ಸಮರ್ಪಕವಾಗಿ ಬಳಸಿಕೊಂಡು ಕಾಲಕಾಲಕ್ಕೆ ಕಾಮಗಾರಿಗಳ ಪರಿವೀಕ್ಷಣೆ/ಗುಣ ಪರೀಕ್ಷಾ ಪ್ರಕ್ರಿಯೆಗಳನ್ನು ನಿರ್ವಹಿಸುತ್ತಿರುವ ಬಗ್ಗೆ ರ್‍ಯಾಂಡಂ ಪರಿಶೀಲನೆ ನಡೆಸಿ ಖಾತ್ರಿಪಡಿಸಿಕೊಳ್ಳುವುದು.

5) ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವ್ಯಾಪ್ತಿಯಲ್ಲಿ ನಿರ್ವಹಿಸಲಾಗುವ ಬಂದರು ಮತ್ತು ಒಳನಾಡು ಜಲಸಾರಿಗೆ ನಿರ್ದೇಶನಾಲಯ ಕಾಮಗಾರಿಗಳ ಗುಣ ಭರವಸೆಯ ಬಗ್ಗೆ ಮೇಲ್ವಿಚಾರಣೆ ಮತ್ತು ಪರಿಶೀಲನೆಯನ್ನು ರ್‍ಯಾಂಡಂ ಆಧಾರದ ಮೇಲೆ ಕೈಗೊಳ್ಳುವ ಜವಾಬ್ದಾರಿ ಹೊಂದಿರುತ್ತಾರೆ.

6) ಆಯ್ದ ಆರ್‌ಎಂಸಿ/ಹಾಟ್‌ಮಿಕ್ಸ್ ಪ್ಲಾಂಟ್‌ಗಳನ್ನು ಖುದ್ದು ಸಂಪರ್ಕಿಸಿ, ಜಲ್ಲಿ, ಸಿಮೆಂಟ್, ಮರಳು, ಬಳಸುವ ನೀರು ಮತ್ತು ಡಾಂಬರನ್ನು ಪರಿಶೀಲಿಸಿ, ಪರಿಮಾಣ ಮತ್ತು ಗುಣಮಟ್ಟದ ಬಗ್ಗೆ ಸೂಕ್ತ ನಿರ್ದೇಶನ ನೀಡತಕ್ಕದ್ದು.

7) ತಮ್ಮ ಅಧೀನದಲ್ಲಿನ ಗುಣಭರವಸೆ ಉಪವಿಭಾಗಗಳಿಂದ ನೀಡಲ್ಪಡುವ ಪರೀಕ್ಷಾ ವರದಿಗಳು ಅಧಿಕೃತ ಮಾನಕ ಸಂಸ್ಥೆಗಳು ಕಾಲಕಾಲಕ್ಕೆ ನಿಗದಿಪಡಿಸುವ ವಿವರಣೆಗಳಿಗೆ ಪೂರಕವಾಗಿರುವ ಬಗ್ಗೆ ಪರಿಶೀಲಿಸಿಕೊಳ್ಳುವುದು. ಅಗತ್ಯವಿದ್ದಲ್ಲಿ, ಅಧೀಕ್ಷಕ ಇಂಜಿನಿಯರ್, ಗುಣಭರವಸೆ ವೃತ್ತ ಇವರಿಂದ ಅನುಮೋದನೆ ಪಡೆಯತಕ್ಕದ್ದು.

8) ತಾವು ಪರಿವೀಕ್ಷಣೆ ನಡೆಸಿದ ಬಗ್ಗೆ ತಾಂತ್ರಿಕ ಟಿಪ್ಪಣಿಗಳ ಪ್ರತಿಗಳನ್ನು ಮುಖ್ಯ ಇಂಜಿನಿಯರ್ ಹಾಗೂ ಸರ್ಕಾರಕ್ಕೆ ಸಲ್ಲಿಸುವುದರೊಂದಿಗೆ ಗುಣ ಭರವಸೆ ಘಟಕದ ಅಧೀಕ್ಷಕ ಇಂಜಿನಿಯರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರಿಗೆ ಮತ್ತು ಸಂಬಂಧಪಟ್ಟ ಕಾಮಗಾರಿ ವೃತ್ತದಲ್ಲಿನ ಅಧೀಕ್ಷಕ ಇಂಜಿನಿಯರ್, ಕಾರ್ಯಪಾಲಕ ಇಂಜಿನಿಯರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳಿಗೆ ಒದಗಿಸುವುದು.

9) ತಮ್ಮ ಪರಿವೀಕ್ಷಣೆ ಸಮಯದಲ್ಲಿ ನಿರ್ವಹಿಸಲಾದ ಕಾಮಗಾರಿ ಅಂಶಗಳಲ್ಲಿ ನ್ಯೂನತೆಗಳನ್ನು ಗಮನಿಸಿದ ಸಂದರ್ಭಗಳಲ್ಲಿ ತಾಂತ್ರಿಕ ಸಮರ್ಪಕತೆಯಲ್ಲಿ ಅವುಗಳನ್ನು ಸರಿಪಡಿಸಲು ಅಥವಾ ಮರುನಿರ್ವಹಿಸಲು ಸೂಚಿಸುವುದರೊಂದಿಗೆ ಸಂಬಂಧಪಟ್ಟ ನಿರ್ಮಾಣ ಘಟಕದ ಇಂಜಿನಿಯರುಗಳು ಸೂಕ್ತ ಕ್ರಮ ಕೈಗೊಂಡಿರುವ ಬಗ್ಗೆ ಆಯಾ ನಿರ್ಮಾಣ ವಿಭಾಗಗಳ ಕಾರ್ಯಪಾಲಕ ಇಂಜಿನಿಯರುಗಳು ಸಲ್ಲಿಸಲಾದ ಪೂರಕ ದಾಖಲೆಗಳನ್ನೊಳಗೊಂಡ ಪಾಲನಾ ವರದಿಗಳ ಔಚಿತ್ಯವನ್ನು ಪರಿಶೀಲಿಸಿಕೊಳ್ಳುವುದು.

10) ತಮ್ಮ ಕಾರ್ಯವ್ಯಾಪ್ತಿಯಲ್ಲಿ ಪ್ರಗತಿಯಲ್ಲಿರುವ ಪ್ರಮುಖ ಕಾಮಗಾರಿಗಳನ್ನು ಪ್ರಾಧಾನ್ಯತೆ ಹಾಗೂ ಅಂದಾಜು ಮೊತ್ತದ ಆಧಾರದ ಮೇಲೆ ಸ್ವಯಂ-ಆಯ್ಕೆ ಮಾಡಿಕೊಂಡು ಪರಿವೀಕ್ಷಣೆ ನಡೆಸುವ ಗುರಿ ಹೊಂದಬೇಕಿದ್ದು, ಪ್ರತಿ ಮಾಸಿಕದಲ್ಲಿ ಪರಿವೀಕ್ಷಣೆಗೊಳಪಡಿಸುವ ಅಂತಹ ಕಾಮಗಾರಿಗಳ ಒಟ್ಟು ಸಂಖ್ಯೆಯು ಆಯಾ ಆರ್ಥಿಕ ವರ್ಷದಲ್ಲಿ ಮಾಸಿಕ ಸರಾಸರಿ 20 ಕ್ಕಿಂತ ಕಡಿಮೆ ಇರತಕ್ಕದ್ದಲ್ಲ, ಸ್ಥಾನಿಕ ಪ್ರಯೋಗಾಲಯಗಳಲ್ಲಿ ನಿರ್ಮಾಣ ಘಟಕದ ಇಂಜಿನಿಯರುಗಳು, ಮಾನಕ/ಸಂಸ್ಥೆಗಳು/ಗುಣಭರವಸೆ ಮ್ಯಾನುಯಲ್ ಅನ್ವಯ ನಿಗದಿಪಡಿಸಿದ ಅವರ್ತನಕ್ಕನುಗುಣವಾಗಿ ಪೂರ್ಣ ಪ್ರಮಾಣದಲ್ಲಿ ಪರೀಕ್ಷೆಗಳನ್ನು ಕೈಗೊಂಡು ನಿಗದಿತ ವಹಿಗಳಲ್ಲಿ ದಾಖಲಿಸಿರುವ ಬಗ್ಗೆ ಪರಿವೀಕ್ಷಣೆ ಸಮಯದಲ್ಲಿ ಪರಿಶೀಲಿಸತಕ್ಕದ್ದು.

11) ನಿರ್ಮಾಣ ಘಟಕದ ಕಾರ್ಯನಿರ್ವಾಹಕ ಇಂಜಿನಿಯರವರು ಸಲ್ಲಿಸಲಾದ ರೂ. 5.00 (ಐದು) ಕೋಟಿವರೆಗಿನ ಕಾಮಗಾರಿಗಳ ಗುಣಭರವಸೆ ಯೋಜನೆ/ಕಾರ್ಯಕ್ರಮಗಳನ್ನು ಪರಿಶೀಲಿಸಿ ಅನುಮೋದಿಸುವ ಜವಾಬ್ದಾರಿ ಹೊಂದಿರುತ್ತಾರೆ.

12) ತಮ್ಮ ಕಾರ್ಯವ್ಯಾಪ್ತಿಯಲ್ಲಿನ ರೂ. 3.00 (ಮೂರು) ಕೋಟಿಯಿಂದ ರೂ. 5.00 (ಐದು) ಕೋಟಿ ಅಂದಾಜು ಮೊತ್ತದ ಕಾಮಗಾರಿಗಳಿಗೆ (ನಿರ್ವಹಣಾ ಕಾಮಗಾರಿಗಳನ್ನು ಹೊರತುಪಡಿಸಿ) ಅಂತಿಮ ಬಿಲ್ಲನ್ನು ಪರಿಗಣಿಸುವಲ್ಲಿ ಸಂಬಂಧಪಟ್ಟ ನಿರ್ಮಾಣ ಘಟಕದ ಕಾರ್ಯಪಾಲಕ ಇಂಜಿನಿಯರುಗಳು ಅಂತಹ ಕಾಮಗಾರಿಗಳಲ್ಲಿ ಸಮಯೋಚಿತವಾಗಿ ಗುಣಮಟ್ಟದ ಸಾಮಗ್ರಿಗಳನ್ನು ಬಳಸಿ ಸ್ಥಾಪಿತ ನಿರ್ಮಾಣ ಪದ್ಧತಿಗಳಂತೆ ನಿರ್ವಹಿಸಿರುವ ಬಗ್ಗೆ ದೃಢೀಕರಿಸಿ, ಅಳತೆಗಳ ಪರಿಶೀಲನೆಯನ್ನು ಕಡ್ಡಾಯವಾಗಿ ಕೈಗೊಂಡ ನಂತರ ಗುಣಭರವಸೆ ಘಟಕದ ಅಭಿಪ್ರಾಯಕ್ಕಾಗಿ ಕೋರಿಕೆಯನ್ನು ಸಲ್ಲಿಸತಕ್ಕದ್ದು. ಸದರಿ ಕೋರಿಕೆಯನ್ನು ಆಧರಿಸಿ, ಸೂಕ್ತ ಪರಿಶೀಲನೆ ನಂತರ ಗುಣಭರವಸೆ ಘಟಕವು ಅಂತಿಮ ಬಿಲ್ಲು ಪಾವತಿ ಬಗ್ಗೆ ಅಭಿಪ್ರಾಯ ನೀಡತಕ್ಕದ್ದು.

13) ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಗಳ ವ್ಯಾಪ್ತಿಯಲ್ಲಿನ ಅಥವಾ ಕಾಮಗಾರಿಗಳ ಗುಣಭರವಸೆಗಾಗಿ ಸಮಾಲೋಚಕರನ್ನು ನೇಮಿಸಿದ್ದರೂ/ನೇಮಿಸದಿದ್ದರೂ ಸಹ ಸರ್ಕಾರದಿಂದ ನಿರ್ದೇಶಿಸಲ್ಪಟ್ಟ ಯಾವುದೇ ಕಾಮಗಾರಿ/ಯೋಜನೆಯಡಿಯಲ್ಲಿನ ಸದರಿ ಕಾಮಗಾರಿಗಳ ಗುಣಮಟ್ಟದ ಬಗ್ಗೆ ಅಗತ್ಯವಿದ್ದಲ್ಲಿ ರ್‍ಯಾಂಡಂ ಆಧಾರದಲ್ಲಿ ಮೇಲುಸ್ತುವಾರಿ ನಡೆಸತಕ್ಕದ್ದು.

**(III) ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಗುಣ ಭರವಸೆ ಉಪ-ವಿಭಾಗ :**

1) ಸಂಬಂಧಪಟ್ಟ ಕಾರ್ಯಪಾಲಕ ಇಂಜಿನಿಯರ್, ಗುಣ ಭರವಸೆ ವಿಭಾಗ ಇವರ ಮಾರ್ಗದರ್ಶನ ಮತ್ತು ಅಧೀನದಲ್ಲಿ ಕಾರ್ಯ ನಿರ್ವಹಿಸತಕ್ಕದ್ದು.

2) ತಮ್ಮ ಕಾರ್ಯವ್ಯಾಪ್ತಿಯಲ್ಲಿ ಲೋಕೋಪಯೋಗಿ ಇಲಾಖೆಯು ಕೈಗೊಳ್ಳುವ ರಸ್ತೆ, ಸೇತುವೆ, ಕಟ್ಟಡ ಇತ್ಯಾದಿ ಕಾಮಗಾರಿಗಳ ನಿರ್ಮಾಣವು ನಿಗದಿತ ಗುಣಮಟ್ಟಕ್ಕೆ ಪೂರಕವಾಗುವಂತೆ ಅನುಮೋದಿತ ಅಂದಾಜು ಪಟ್ಟಿ/ಗುತ್ತಿಗೆ ಕರಾರಿನಲ್ಲಿನ ವಿಶಿಷ್ಟ ವಿವರಣೆಯನುಸಾರ ಬಳಸಲಾಗುವ

ಕಚ್ಚಾ ಸಾಮಗ್ರಿಗಳ ಗುಣಮಟ್ಟ ಹಾಗೂ ನಿರ್ಮಾಣ ಕಾರ್ಯವಿಧಾನಗಳ ಬಗ್ಗೆ ರ್‍ಯಾಂಡಂ ಆಧಾರದಲ್ಲಿ ಪರಿಶೀಲನೆ ನಡೆಸುವ ಹಾಗೂ ತಾಂತ್ರಿಕ ಸಲಹೆ, ಸೂಚನೆ ಹಾಗೂ ಮಾರ್ಗದರ್ಶನ ನೀಡುವ ಜವಾಬ್ದಾರಿಯನ್ನು ಹೊಂದಿರುತ್ತಾರೆ.

3) ನಿರ್ಮಾಣ ಉಪವಿಭಾಗಗಳ ಕೋರಿಕೆ ಪತ್ರಗಳಿಗನುಗುಣವಾಗಿ ತಮ್ಮ ಕಾರ್ಯವ್ಯಾಪ್ತಿಯಲ್ಲಿನ ಕಾಮಗಾರಿಗಳನ್ನು ಅಂದಾಜು ಪಟ್ಟಿ/ಗುತ್ತಿಗೆ ಕರಾರಿನಲ್ಲಿ ನಿಗದಿಪಡಿಸಲಾದ ವಿಶಿಷ್ಟ ವಿವರಣೆಗಳನ್ವಯ ಮತ್ತು BIS, IRC, NBC, IBC ಹಾಗೂ ಇತರೆ ಮನ್ನಣೆ ಪಡೆದ ಮಾನಕ ಸಂಸ್ಥೆಗಳು/ಗುಣ ಭರವಸೆ ಮ್ಯಾನುಯೆಲ್‌ನಲ್ಲಿ ನಿಗದಿಪಡಿಸಿರುವ ಸಂಹಿತೆಗಳನ್ವಯ ಲಭ್ಯವಿರುವ ಪರೀಕ್ಷಾ ಸಾಧನಗಳಿಂದ ರ್‍ಯಾಂಡಮ್ ಆಧಾರದಲ್ಲಿ ಅವಶ್ಯವಿರುವ ಗುಣಪರೀಕ್ಷೆಗಳಿಗೆ ಒಳಪಡಿಸುವುದು.

ಸ್ಥಾನಿಕ ಪ್ರಯೋಗಾಲಯಗಳಲ್ಲಿ ನಿರ್ಮಾಣ ಘಟಕದ ಇಂಜಿನಿಯರುಗಳು, ಮಾನಕ ಸಂಸ್ಥೆಗಳು/ಗುಣಭರವಸೆ ಮ್ಯಾನುಯಲ್ ಅನ್ವಯ ನಿಗದಿಪಡಿಸಲಾದ ಆವರ್ತಕ್ಕನುಗುಣವಾಗಿ ಪೂರ್ಣ ಪ್ರಮಾಣದಲ್ಲಿ ಪರೀಕ್ಷೆಗಳನ್ನು ಕೈಗೊಂಡು ನಿಗದಿತ ವಹಿಗಳಲ್ಲಿ ದಾಖಲಿಸಿರುವ ಬಗ್ಗೆ ಪರಿವೀಕ್ಷಣೆ ಸಮಯದಲ್ಲಿ ಪರಿಶೀಲಿಸತಕ್ಕದ್ದು. ಗುಣಭರವಸೆ ಇಂಜಿನಿಯರುಗಳು ಸಹ ನಿಗದಿತ ಆವರ್ತನದ ಶೇ. 10ರಷ್ಟು ಪ್ರಮಾಣದಲ್ಲಿ ಪ್ರಮುಖ ಪರೀಕ್ಷೆಗಳನ್ನು ಕೈಗೊಂಡು, ಗುಣಪರೀಕ್ಷಾ ಫಲಿತಾಂಶ ವರದಿಗಳ ಪ್ರತಿಗಳನ್ನು ಗುಣಭರವಸೆ ಘಟಕದ ಅಧೀಕ್ಷಕ ಇಂಜಿನಿಯರ್, ಕಾರ್ಯಪಾಲಕ ಇಂಜಿನಿಯರ್ ಹಾಗೂ ನಿರ್ಮಾಣ ಘಟಕದ ಕಾರ್ಯಪಾಲಕ ಇಂಜಿನಿಯರ್ ಮತ್ತು ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳಿಗೆ ವಿಳಂಬವಿಲ್ಲದೇ ಸಮರ್ಥನೀಯವಾದ ಅವಧಿಯೊಳಗೆ ಒದಗಿಸತಕ್ಕದ್ದು. ವಿಶೇಷ ಸಂದರ್ಭಗಳಲ್ಲಿ, ಗುಣಪರೀಕ್ಷಾ ವರದಿಗಳನ್ನು ಅಗತ್ಯವಿದ್ದಲ್ಲಿ, ಸಂಬಂಧಪಟ್ಟ ಮೇಲಾಧಿಕಾರಿಗಳಿಂದ ಪರಿಶೀಲನೆ/ಅನುಮೋದನೆ ಪಡೆಯತಕ್ಕದ್ದು.

4) ತಮ್ಮ ಅಧೀನದಲ್ಲಿನ ಗುಣಭರವಸೆ ಸಹಾಯಕ/ಕಿರಿಯ ಇಂಜಿನಿಯರ್‌ಗಳು ಕಾಮಗಾರಿ ಸ್ಥಳದಲ್ಲಿ ಕಚ್ಚಾ ಸಾಮಗ್ರಿಗಳ ಮಾದರಿಗಳನ್ನು (ಕಾಂಕ್ರೀಟ್ ಘನಗಳನ್ನು ಹೊರತುಪಡಿಸಿ) ರ್‍ಯಾಂಡಮ್ ಆಧಾರದಲ್ಲಿ ಖುದ್ದು ಸಂಗ್ರಹಿಸಿ ಸ್ಥಾನಿಕವಾಗಿ/ಪ್ರಯೋಗಾಲಯದಲ್ಲಿ ನಿಯಮಾವಳಿಗಳನ್ವಯ ಪರೀಕ್ಷೆಗೊಳಪಡಿಸುತ್ತಿರುವ ಬಗ್ಗೆ ಖಾತ್ರಿ ಪಡಿಸಿಕೊಳ್ಳತಕ್ಕದ್ದು. ಕಾರ್ಯಭಾರ ಹೆಚ್ಚಿರುವ ಸಂದರ್ಭಗಳಲ್ಲಿ ಮಾತ್ರ ಮೇಲಾಧಿಕಾರಿಗಳ ಸಹಮತಿಯೊಂದಿಗೆ ಸಂಬಂಧಪಟ್ಟ ನಿರ್ಮಾಣ ಉಪವಿಭಾಗದಿಂದ ಅಧಿಕೃತವಾಗಿ ಸಂದಾಯಗೊಂಡ ಮಾದರಿಗಳನ್ನು ಪರೀಕ್ಷೆಗೊಳಪಡಿಸಬೇಕಾಗಿದ್ದು, ಪ್ರಯೋಗಾಲಯದಲ್ಲಿ/ಕಾಮಗಾರಿ ಸ್ಥಳದಲ್ಲಿ ಕೈಗೊಂಡ ಪರೀಕ್ಷೆಗಳಿಗೆ ಗುಣಭರವಸೆ ಶಾಖಾಧಿಕಾರಿಗಳೇ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ. ಶಾಖಾಧಿಕಾರಿಗಳು ನಡೆಸುವ ಒಟ್ಟು ಪರೀಕ್ಷೆಗಳಲ್ಲಿ ಕನಿಷ್ಠ 10% ರಷ್ಟು ಸಂಖ್ಯೆಯ ಪರೀಕ್ಷೆಗಳನ್ನು ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರವರು ಮೇಲುಸ್ತುವಾರಿ ನಡೆಸಿ ಆ ಬಗ್ಗೆ ವರದಿಗಳಲ್ಲಿ ಸೂಕ್ತವಾಗಿ ದಾಖಲಿಸತಕ್ಕದ್ದು. ಕಾಮಗಾರಿ ಸ್ಥಳಗಳಿಗೆ ಭೇಟಿ ನೀಡಿ ಸಾಮಗ್ರಿಗಳನ್ನು ಸಂಗ್ರಹಿಸಲಾದ ಬಗ್ಗೆ/ಪರೀಕ್ಷಿಸಲಾದ ಬಗ್ಗೆ ಜಿಪಿಎಸ್ ಒಳಗೊಂಡ ಛಾಯಾ ಚಿತ್ರಗಳ ಮೂಲಕ ಅಥವಾ ವಿದ್ಯುನ್ಮಾನ ಸ್ವರೂಪದಲ್ಲಿ ದಾಖಲೆಗಳನ್ನು ನಿರ್ವಹಿಸತಕ್ಕದ್ದು. ತಮ್ಮ ಕಾರ್ಯಕ್ಷೇತ್ರದಲ್ಲಿ ಉಪಲಬ್ಧವಿರುವ ಮೂಲಭೂತ ಸೌಕರ್ಯಗಳ ಮಿತಿಯಲ್ಲಿ ಸಾಧ್ಯವಾಗದ ಪರೀಕ್ಷೆಗಳನ್ನು ನೋಂದಾಯಿತ/ಮನ್ನಣೆ ಪಡೆದ ಖಾಸಗಿ ಪ್ರಯೋಗಾಲಯಗಳಲ್ಲಿ ಸಂಬಂಧಪಟ್ಟ ನಿರ್ಮಾಣ ಉಪವಿಭಾಗದವರ ಮೂಲಕ ಕೈಗೊಳ್ಳಬಹುದಾಗಿದೆ.

5) ಆಯ್ದ ಆರ್‌ಎಂಸಿ/ಹಾಟ್‌ಮಿಕ್ಸ್ ಪ್ಲಾಂಟ್‌ಗಳನ್ನು ಖುದ್ದು ಸಂಪರ್ಕಿಸಿ, ಜಲ್ಲಿ ಸಿಮೆಂಟ್, ಮರಳು ಬಳಸುವ ನೀರು ಮತ್ತು ಡಾಂಬರನ್ನು ಪರಿಶೀಲಿಸಿ, ಪರಿಮಾಣ ಮತ್ತು ಗುಣಮಟ್ಟದ ಬಗ್ಗೆ ಸೂಕ್ತ ನಿರ್ದೇಶನ ನೀಡತಕ್ಕದ್ದು.

6) ತಾವು ಪರಿವೀಕ್ಷಣೆ ನಡೆಸಿದ ಬಗ್ಗೆ ತಾಂತ್ರಿಕ ಟಿಪ್ಪಣಿಗಳ ಪ್ರತಿಗಳನ್ನು ಸರ್ಕಾರ ಹಾಗೂ ಮುಖ್ಯ ಇಂಜಿನಿಯರ್‌ರವರಿಗೆ ಸಲ್ಲಿಸುವುದರೊಂದಿಗೆ ಗುಣ ಭರವಸೆ ಘಟಕದ ಅಧೀಕ್ಷಕ ಇಂಜಿನಿಯರ್, ಕಾರ್ಯಪಾಲಕ ಇಂಜಿನಿಯರ್, ಮತ್ತು ಸಂಬಂಧಪಟ್ಟ ಕಾಮಗಾರಿ ವೃತ್ತದಲ್ಲಿನ ಅಧೀಕ್ಷಕ ಇಂಜಿನಿಯರ್, ಕಾರ್ಯಪಾಲಕ ಇಂಜಿನಿಯರ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ಗಳಿಗೆ ಒದಗಿಸುವುದು.

7) ಗುಣಭರವಸೆ ಉಪವಿಭಾಗದಿಂದ ನೀಡಲ್ಪಡುವ ಎಲ್ಲಾ ಗುಣಪರೀಕ್ಷಾ ವರದಿಗಳು ಅಧಿಕೃತ ಮಾನಕ ಸಂಸ್ಥೆಗಳು ಕಾಲಕಾಲಕ್ಕೆ ನಿಗದಿಪಡಿಸುವ ವಿವರಣೆಗಳಿಗೆ ಪೂರಕವಾಗಿರತಕ್ಕದ್ದು. ಸದರಿ ವರದಿಗಳನ್ನು ಕ್ರಮಬದ್ಧವಾಗಿ ಕಾಮಗಾರಿವಾರು ಹಾಗೂ ಪರೀಕ್ಷಾವಾರು ಪ್ರತ್ಯೇಕ ವಹಿಗಳಲ್ಲಿ ದಾಖಲಿಸತಕ್ಕದ್ದು.

8) ತಮ್ಮ ಕಾರ್ಯವ್ಯಾಪ್ತಿಯಲ್ಲಿ ಪ್ರಗತಿಯಲ್ಲಿರುವ ಪ್ರಮುಖ ಕಾಮಗಾರಿಗಳನ್ನು ಪ್ರಾಧಾನ್ಯತೆ ಹಾಗೂ ಅಂದಾಜು ಮೊತ್ತದ ಆಧಾರದ ಮೇಲೆ ಸ್ವಯಂ-ಆಯ್ಕೆ ಮಾಡಿಕೊಂಡು ಪರಿವೀಕ್ಷಣೆ ನಡೆಸುವ ಗುರಿ ಹೊಂದಬೇಕಿದ್ದು, ಪ್ರತಿ ಮಾಸಿಕದಲ್ಲಿ ಪರಿವೀಕ್ಷಣೆಗೊಳಪಡಿಸುವ ಅಂತಹ ಕಾಮಗಾರಿಗಳ ಒಟ್ಟು ಸಂಖ್ಯೆಯು ಆಯಾ ಆರ್ಥಿಕ ವರ್ಷದಲ್ಲಿ ಮಾಸಿಕ ಸರಾಸರಿ 15 ಕ್ಕಿಂತ ಕಡಿಮೆ ಇರತಕ್ಕದ್ದಲ್ಲ. ಕಾಮಗಾರಿಗಳ ಪರಿವೀಕ್ಷಣೆ ಜೊತೆಗೆ ಸಾಮಗ್ರಿಗಳ ಮಾದರಿ ಸಂಗ್ರಹಣೆ/ಸ್ಥಾನಿಕವಾಗಿ ಸಾಮಗ್ರಿಗಳ ಗುಣಪರೀಕ್ಷೆ, ನಿರ್ಮಾಣ ಘಟಕದ ಇಂಜಿನೀಯರುಗಳಿಗೆ ಗುಣಪರೀಕ್ಷೆ ಪ್ರಕ್ರಿಯೆಗಳ ಬಗ್ಗೆ ಪ್ರಾತ್ಯಕ್ಷಿಕೆ ನೀಡತಕ್ಕದ್ದು. ತಮ್ಮ ಪರಿವೀಕ್ಷಣೆಯ ಸಮಯದಲ್ಲಿ ನಿರ್ವಹಿಸಲಾದ ಕಾಮಗಾರಿ ಅಂಶಗಳ ನ್ಯೂನ್ಯತೆಗಳನ್ನು ಗಮನಿಸಿದ ಸಂದರ್ಭಗಳಲ್ಲಿ ತಾಂತ್ರಿಕ ಸಮರ್ಪಕತೆಯಲ್ಲಿ ಅವುಗಳನ್ನು ಸರಿಪಡಿಸಲು ಅಥವಾ ಮರುನಿರ್ವಹಿಸಲು ಸೂಚಿಸುವುದರೊಂದಿಗೆ ಸಂಬಂಧಪಟ್ಟ ನಿರ್ಮಾಣ ಘಟಕದ ಇಂಜಿನಿರ್‌ಗಳು ಸೂಕ್ತ ಕ್ರಮ ಕೈಗೊಂಡಿರುವ ಬಗ್ಗೆ ಆಯಾ ನಿರ್ಮಾಣ ವಿಭಾಗಗಳ ಕಾರ್ಯಪಾಲಕ ಇಂಜಿನಿಯರುಗಳು ಒದಗಿಸಲಾದ ಪೂರಕ ದಾಖಲೆಗಳನ್ನೊಳಗೊಂಡ ಪಾಲನಾ ವರದಿಗಳ ಔಚಿತ್ಯವನ್ನು ಪರಿಶೀಲಿಸಿಕೊಳ್ಳುವುದು.

9) ತಮ್ಮ ಕಾರ್ಯವ್ಯಾಪ್ತಿಯಲ್ಲಿನ ರೂ. 1.00 (ಒಂದು) ಕೋಟಿಯಿಂದ ರೂ. 3.00 (ಮೂರು) ಕೋಟಿ ಅಂದಾಜು ಮೊತ್ತದ ಕಾಮಗಾರಿಗಳಿಗೆ (ನಿರ್ವಹಣಾ ಕಾಮಗಾರಿಗಳನ್ನು ಹೊರತುಪಡಿಸಿ) ಅಂತಿಮ ಬಿಲ್ಲನ್ನು ಪರಿಗಣಿಸುವಲ್ಲಿ ಸಂಬಂಧಪಟ್ಟ ನಿರ್ಮಾಣ ಘಟಕದ ಕಾರ್ಯಪಾಲಕ ಇಂಜಿನಿಯರುಗಳು ಅಂತಹ ಕಾಮಗಾರಿಗಳಲ್ಲಿ ಸಮಯೋಚಿತವಾಗಿ ಗುಣಮಟ್ಟದ ಸಾಮಗ್ರಿಗಳನ್ನು ಬಳಸಿ ಸ್ಥಾಪಿತ ನಿರ್ಮಾಣ ಪದ್ಧತಿಗಳಂತೆ ನಿರ್ವಹಿಸಿರುವ ಬಗ್ಗೆ ದೃಢಿಕರಿಸಿ, ಅಳತೆಗಳ ಪರಿಶೀಲನೆಯನ್ನು ಕಡ್ಡಾಯವಾಗಿ ಕೈಗೊಂಡ ನಂತರ ಗುಣಭರವಸೆ ಘಟಕದ ಅಭಿಪ್ರಾಯಕ್ಕಾಗಿ ಕೋರಿಕೆಯನ್ನು ಸಲ್ಲಿಸತಕ್ಕದ್ದು. ಸದರಿ ಕೋರಿಕೆಯನ್ನು ಆಧರಿಸಿ, ಸೂಕ್ತ ಪರಿಶೀಲನೆ ನಂತರ ಗುಣಭರವಸೆ ಘಟಕವು ಅಂತಿಮ ಬಿಲ್ಲು ಪಾವತಿ ಬಗ್ಗೆ ಅಭಿಪ್ರಾಯ ನೀಡತಕ್ಕದ್ದು.

10) ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆಗಳ ವ್ಯಾಪ್ತಿಯಲ್ಲಿನ ಅಥವಾ ಕಾಮಗಾರಿಗಳ ಗುಣಭರವಸೆಗಾಗಿ ಸಮಾಲೋಚಕರನ್ನು ನೇಮಿಸಿದ್ದರೂ/ನೇಮಿಸದಿದ್ದರೂ ಸಹ

ಸರ್ಕಾರದಿಂದ ನಿರ್ದೇಶಿಸಲ್ಪಟ್ಟ ಯಾವುದೇ ಕಾಮಗಾರಿ/ಯೋಜನೆಯಡಿಯಲ್ಲಿನ ಸದರಿ ಕಾಮಗಾರಿಗಳ ಗುಣಮಟ್ಟದ ಬಗ್ಗೆ ಅಗತ್ಯವಿದ್ದಲ್ಲಿ ಆಯ್ದ ರೀತಿಯಲ್ಲಿ (ರ್‍ಯಾಂಡಂ ಆಧಾರದಲ್ಲಿ) ಮೇಲುಸ್ತುವಾರಿ ನಡೆಸತಕ್ಕದ್ದು.

**II**

1) ಗುಣಭರವಸೆ ವ್ಯವಸ್ಥೆಯಡಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಅಧಿಕಾರಿಗಳು ಈ ಮೇಲೆ ಸೂಚಿಸಲಾದ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು. ಈ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸಲು ವಿಫಲರಾಗುವ ಅಧಿಕಾರಿಗಳು ಸಿಸಿಎ ನಿಯಮದಡಿ ಶಿಸ್ತು ಕ್ರಮಕ್ಕೆ ಗುರಿಯಾಗುತ್ತಾರೆ.

2) ಗುಣಭರವಸೆ ಇಂಜಿನಿಯರುಗಳು ಕಾಮಗಾರಿಗಳ ಪರಿವೀಕ್ಷಣೆ/ಮಾದರಿಗಳ ಸಂಗ್ರಹಣೆ ಹಾಗೂ ಪರೀಕ್ಷೆಗಳಿಗೆ ಸಂಬಂಧಿಸಿದ ಪ್ರಕ್ರಿಯೆಗಳನ್ನು ಕೈಗೊಂಡ ಸಂದರ್ಭದಲ್ಲಿ ಸಂಬಂಧಪಟ್ಟ ನಿರ್ಮಾಣ ಘಟಕದ ಇಂಜಿನಿಯರುಗಳು ಉಪಸ್ಥಿತಿಯೊಂದಿಗೆ ಅಗತ್ಯ ಸಹಕಾರವನ್ನು ಕಡ್ಡಾಯವಾಗಿ ನೀಡತಕ್ಕದ್ದು.

3) ಗುಣಭರವಸೆ ಅಧಿಕಾರಿಗಳಿಗೆ ಮೇಲ್ಕಂಡಂತೆ ಕರ್ತವ್ಯ ಹಾಗೂ ಹೊಣೆಗಾರಿಕೆಗಳನ್ನು ನಿಗದಿಪಡಿಸಿದ್ದರೂ ಸಹಿತ ಇಲಾಖಾ ನಿಯಮಗಳನ್ವಯ ನಿರ್ಮಾಣ ಘಟಕದ ಇಂಜಿನಿಯರುಗಳು ತಾವು ನಿರ್ಮಿಸಲಾಗುವ/ನಿರ್ವಹಿಸಲಾಗುವ ಕಾಮಗಾರಿ ಅಂಶಗಳ: ಪರಿಮಾಣ ಹಾಗೂ ಗುಣಮಟ್ಟಕ್ಕೆ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ ಎಂದು ಸ್ಪಷ್ಟೀಕರಿಸಲಾಗಿದೆ.

4) ನಿರ್ಮಾಣ ಘಟಕದ ಎಲ್ಲಾ ಕಾರ್ಯಪಾಲಕ ಇಂಜಿನಿಯರವರುಗಳು ಗುತ್ತಿಗೆ ಕರಾರು ಪತ್ರದೊಂದಿಗೆ ವಿಶಿಷ್ಟ ವಿವರಗಳನ್ನೊಳಗೊಂಡ ಬಿ.ಓ.ಕ್ಯೂ. ಕಾರ್ಯದೇಶ ಹಾಗೂ ಕಾಮಗಾರಿಯ ಗುಣಭರವಸೆ ಯೋಜನೆ/ಕಾರ್ಯಕ್ರಮವನ್ನು ತಯಾರಿಸಿ (ಗುಣಭರವಸೆ ಅಧಿಕಾರಿಗಳೊಂದಿಗೆ ಸಮಾಲೋಚಿಸಿ) ಸಂಬಂಧಪಟ್ಟ ಗುಣಭರವಸೆ ಘಟಕದ ಅಧಿಕಾರಿಗಳಿಗೆ ಕೂಡಲೇ ನೀಡತಕ್ಕದ್ದು.

5) ನಿರ್ಮಾಣ ಘಟಕದ ಕಾರ್ಯಪಾಲಕ ಇಂಜಿನಿಯರುಗಳು ಮಾಸಿಕ ಪ್ರಗತಿ ಪರಿಶೀಲನಾ ವರದಿಯ ಪ್ರತಿಯನ್ನು ತಪ್ಪದೇ ಸಂಬಂಧಿಸಿದ ಗುಣ ಭರವಸೆ ಘಟಕಕ್ಕೆ ಕಳುಹಿಸುವುದು.

6) ನಿರ್ಮಾಣ ಘಟಕದ ಕಾರ್ಯಪಾಲಕ ಇಂಜಿನಿಯರ್‌ಗಳು ಗುಣಭರವಸೆ ಘಟಕದ ಅಧಿಕಾರಿಗಳು ನೀಡಿದ ಸೂಚನೆ/ಟಿಪ್ಪಣಿಗಳಿಗೆ ಪಾಲನಾ ವರದಿಯನ್ನು ಪರಿವೀಕ್ಷಣಾ ಟಿಪ್ಪಣಿ ತಲುಪಿದ 15 ದಿನಗಳ ಒಳಗೆ ಅಗತ್ಯವಿರುವ ಪೂರಕ ದಾಖಲೆ ಸಮೇತ ಸಂಬಂಧಿಸಿದ ಗುಣಭರವಸೆ ಅಧಿಕಾರಿಗಳಿಗೆ ಕಳುಹಿಸತಕ್ಕದ್ದು.

7) ನಿರ್ಮಾಣ ಘಟಕದ ಕಾರ್ಯಪಾಲಕ ಇಂಜಿನಿಯರ್‌ಗಳು, ಗುತ್ತಿಗೆದಾರರು ಕಾಮಗಾರಿಯನ್ನು ಪ್ರಾರಂಭಿಸುವ ಮುನ್ನ, ಕ್ಷೇತ್ರ ಪ್ರಯೋಗಾಲಯವನ್ನು (field laboratory) ಅನುಷ್ಠಾನಗೊಳಿಸಿರುವ ಬಗ್ಗೆ ಗುಣಭರವಸೆ ಘಟಕದಿಂದ ದೃಢೀಕರಣ ಪಡೆದ ನಂತರ ಮೊದಲನೇ ಚಾಲ್ತಿ ಪಾವತಿ ಪಟ್ಟಿ (1st RA Bill)ಯನ್ನು ಪಾವತಿ ಮಾಡತಕ್ಕದ್ದು.

ಗುಣ ಭರವಸೆ ವ್ಯವಸ್ಥೆಯಡಿ ಕಾರ್ಯನಿರ್ವಹಿಸುತ್ತಿರುವ ಎಲ್ಲಾ ಅಧಿಕಾರಿಗಳು ಈ ಮೇಲೆ ಸೂಚಿಸಲಾಗಿರುವ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು. ಈ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸಲು ವಿಫಲರಾಗುವ ಅಧಿಕಾರಿಗಳು ಸಿಸಿಎ ನಿಯಮಗಳಡಿ ಶಿಸ್ತು ಕ್ರಮಕ್ಕೆ ಗುರಿಯಾಗುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮರಿಯಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

(ಸೇವೆಗಳು–2)

**P.R. 48**
**SC - 500**

## ಕಂದಾಯ ಸಚಿವಾಲಯ

**ವಿಷಯ :** ಯಾದಗಿರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಯಾದಗಿರಿ ಇವರಿಗೆ ಉದ್ದೇಶಿತ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ ನಿರ್ಮಾಣಕ್ಕಾಗಿ ಯಾದಗಿರಿ ಜಿಲ್ಲೆ, ಯಾದಗಿರಿ ತಾಲ್ಲೂಕಿನ ಮುದ್ನಾಳ ಗ್ರಾಮದ ಸ.ನಂ. 24 ಮತ್ತು ಸ.ನಂ. 28/1ರಲ್ಲಿ ಒಟ್ಟು 30.38 ಎಕರೆ ಜಮೀನನ್ನು ಮಂಜೂರು ಮಾಡುವ ಬಗ್ಗೆ

**ಓದಲಾಗಿದೆ :**

1. ಪ್ರಾದೇಶಿಕ ಆಯುಕ್ತರು, ಕಲಬುರಗಿ ಇವರ ಪತ್ರ ಸಂಖ್ಯೆ: ಕಂ.ಪ್ರಾಆಗು.ಭೂಮಿ–1/119/ 2014–15, ದಿನಾಂಕ: 18–10–2014
2. ಜಿಲ್ಲಾಧಿಕಾರಿ, ಯಾದಗಿರಿ ಜಿಲ್ಲೆ, ಇವರ ಪತ್ರ ಸಂಖ್ಯೆ: ಕಂ/ಭೂಮಿ/208/2014–15, ದಿನಾಂಕ: 17–10–2014

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ಪ್ರಾದೇಶಿಕ ಆಯುಕ್ತರು, ಕಲಬುರಗಿ ವಿಭಾಗ, ಇವರು ಯಾದಗಿರಿ ಜಿಲ್ಲೆ, ಯಾದಗಿರಿ ತಾಲ್ಲೂಕಿನ ಮುದ್ನಾಳ ಗ್ರಾಮದ ಸ.ನಂ. 24ರಲ್ಲಿ 17–20 ಎಕರೆ ಮತ್ತು ಸ.ನಂ. 28/1ರಲ್ಲಿ 13.18 ಎಕರೆ ಒಟ್ಟು 30.38 ಎಕರೆ ಜಮೀನನ್ನು ಉದ್ದೇಶಿತ ಯಾದಗಿರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ನಿರ್ಮಾಣಕ್ಕಾಗಿ ಕಾಯ್ದಿರಿಸಲು ಅನುಮೋದನೆ ಕೋರಿರುತ್ತಾರೆ.

ಕ್ರಮಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ, ಯಾದಗಿರಿ ಇವರು ಯಾದಗಿರಿ ತಾಲ್ಲೂಕಿನ ಮುದ್ನಾಳ ಗ್ರಾಮದ ಸ.ನಂ. 24ರಲ್ಲಿ ಒಟ್ಟು 21.33 ಎಕರೆ ಸರ್ಕಾರಿ ಗಾಯರಾಣ ಜಮೀನಿದ್ದು, ಈ ಜಮೀನಿನ ಪೈಕಿ 17.20 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 97(4)ರಡಿ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ ಹಾಗೂ ಸ.ನಂ. 28/1ರಲ್ಲಿ 13.18 ಎಕರೆ ಹೀಗೆ ಒಟ್ಟು 30.38 ಎಕರೆ ಜಮೀನನ್ನು ಉದ್ದೇಶಿತ

ಯಾದಗಿರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ನಿರ್ಮಾಣದ ಸಲುವಾಗಿ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 71ರಡಿ ಕಾಯ್ದಿರಿಸಲು ಅನುಮೋದನೆ ಕೋರಿರುತ್ತಾರೆ.

ಮುಂದುವರೆದು, ಮುದ್ನಾಳ ಗ್ರಾಮ ಮತ್ತು ಭೀಮನಗರ ಗ್ರಾಮದಲ್ಲಿ ಸುಮಾರು 4678 ಜಾನುವಾರುಗಳಿದ್ದು, ಸದರಿ ಜಾನುವಾರುಗಳು ಬಹುತೇಕ ಸಾಕುಪ್ರಾಣಿಗಳಾಗಿದ್ದು, ಸ್ಥಳೀಯ ರೈತರು ತಮ್ಮ ಕೃಷಿ ಜಮೀನಿನಲ್ಲಿ ಬೆಳೆದ ಫಸಲು/ಕೃಷಿ ಉತ್ಪನ್ನ ಇತ್ಯಾದಿಗಳನ್ನು ಅವಲಂಭಿಸಿರುತ್ತವೆಂದು ಹಾಗೂ ಕೆಲವೇ ಕೆಲವು ಬೀಡಾಡಿ ದನಗಳು ಮಾತ್ರ ಸದರಿ ಸರ್ಕಾರಿ ಗಾಯರಾಣ ಜಮೀನನ್ನು ಅವಲಂಭಿಸಿರುವುದಾಗಿ ಪಶುಪಾಲನೆ ಹಾಗೂ ಪಶು ವೈದ್ಯಕೀಯ ಸೇವಾ ಇಲಾಖೆ, ಯಾದಗಿರಿ ಇವರು ವರದಿ ಮಾಡಿರುತ್ತಾರೆಂದು ಜಿಲ್ಲಾಧಿಕಾರಿ, ಯಾದಗಿರಿ ಇವರು ತಿಳಿಸಿರುತ್ತಾರೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಇಲಾಖೆ ಇವರು ದಿನಾಂಕ: 03-09-2014ರಂದು ಯಾದಗಿರಿ ಜಿಲ್ಲೆಯ ಮುದ್ನಾಳ ಗ್ರಾಮದ ಸ.ನಂ. 24ರಲ್ಲಿ 17.20 ಎಕರೆ ಹಾಗೂ ಸ.ನಂ. 28/1ರಲ್ಲಿ 13.18 ಎಕರೆ ಒಟ್ಟು 30.38 ಎಕರೆ ಜಮೀನಿನ ಸ್ಥಳ ತನಿಖೆ ಕೈಗೊಂಡು ಉದ್ದೇಶಿತ ಯಾದಗಿರಿ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ಸರ್ಕಾರಿ ನರ್ಸಿಂಗ್ ಶಾಲೆ, ಪ್ಯಾರಾಮೆಡಿಕಲ್ ಇನ್ಸ್‌ಟಿಟ್ಯೂಟ್ ನಿರ್ಮಾಣಕ್ಕಾಗಿ ಸೂಕ್ತ ಸ್ಥಳವಾಗಿದೆಯೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 38 ಎಲ್‌ಜಿಜಿ 2014, ಬೆಂಗಳೂರು, ದಿನಾಂಕ: 15-12-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಯಾದಗಿರಿ ಜಿಲ್ಲೆ, ಯಾದಗಿರಿ ತಾಲ್ಲೂಕಿನ ಮುದ್ನಾಳ ಗ್ರಾಮದ ಸ.ನಂ. 24ರಲ್ಲಿನ 17-20 ಎಕರೆ ಜಮೀನನ್ನು ಕರ್ನಾಟಕ ಭೂಕಂದಾಯ ನಿಯಮಗಳು 1966ರ ನಿಯಮ 97(4)ರಡಿ ಗಾಯರಾಣ ಶೀರ್ಷಿಕೆಯಿಂದ ತಗ್ಗಿಸಿ ಹಾಗೂ ಸ.ನಂ. 28/1ರಲ್ಲಿ 13.18 ಎಕರೆ ಹೀಗೆ ಒಟ್ಟು 30.38 ಎಕರೆ ಜಮೀನನ್ನು ಉದ್ದೇಶಿತ ಯಾದಗಿರಿ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಯಾದಗಿರಿ ಇವರಿಗೆ ಯಾದಗಿರಿ ವೈದ್ಯಕೀಯ ಕಾಲೇಜು ಹಾಗೂ ಆಸ್ಪತ್ರೆ ನಿರ್ಮಾಣಕ್ಕಾಗಿ ಸಲುವಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ) ಪ್ರಕಾರ ಜಮೀನಿನ ಮಾರ್ಗಸೂಚಿ ಬೆಲೆಯ ಶೇ. 50ರಷ್ಟನ್ನು ವಿಧಿಸಿ ಈ ಕೆಳಕಂಡ ಷರತ್ತಗಳೊಂದಿಗೆ ಮಂಜೂರು ಮಾಡಿ ಆದೇಶಿಸಿದೆ.

**ಷರತ್ತುಗಳು :**

1. ಜಮೀನು ಹಸ್ತಾಂತರ ಪ್ರಕ್ರಿಯೆಯನ್ನು ಜಿಲ್ಲಾಧಿಕಾರಿ, ಯಾದಗಿರಿ ಜಿಲ್ಲೆ ಇವರು ನಿಯಮಾನುಸಾರ ನಿರ್ವಹಿಸಲು ನಿರ್ದೇಶನ ನೀಡಿದೆ.
2. ಸಂಸ್ಥೆಯು ಗ್ರಾಮಸ್ಥರಿಗೆ ಅವಶ್ಯವಿರುವ ಕಡೆ ಪರ್ಯಾಯ ಸಂಪರ್ಕ ರಸ್ತೆಯನ್ನು ಕಲ್ಪಿಸಿಕೊಡತಕ್ಕದ್ದು.
3. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆ ನೀಡುವುದಾಗಲಿ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು. ಹಾಗೂ ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.
6. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
7. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ, ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಮಹಾಂತೇಗೌಡ ಎಸ್.ಎಲ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಮಂಜೂರಾತಿ-3)

**P.R. 49**

**SC - 10**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಡಾ॥ ಎ. ಆರ್. ಅರುಣ, ನಿರ್ದೇಶಕರು, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು (ಪ್ರಸ್ತುತ ನಿಯೋಜನೆ ಮೇರೆಗೆ: ನಿರ್ದೇಶಕರು, ರಾಜ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಸ್ಥೆ, ಬೆಂಗಳೂರು) ಇವರ ವಿರುದ್ಧ ಇಲಾಖಾ ವಿಚಾರಣೆ-ಅಂತಿಮ ಆದೇಶ ಹೊರಡಿಸುವ ಕುರಿತು

**ಓದಲಾಗಿದೆ :**

1) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ (ವೈದ್ಯಕೀಯ ಶಿಕ್ಷಣ) ಅನಧಿಕೃತ ಟಿಪ್ಪಣಿ ಸಂಖ್ಯೆ: ಆಕುಕ 387 ಎಂಎಸ್‌ಎಫ್ 2011, ದಿನಾಂಕ: 05-04-2013
2) ಆದೇಶ ಸಂಖ್ಯೆ: ಆಕುಕ 300 ಎಂಎಸ್‌ಎಫ್ 2001, ದಿನಾಂಕ: 29-08-2011
3) ಶ್ರೀ ಎನ್. ನಾರಾಯಣ, ವಿಚಾರಣಾಧಿಕಾರಿ ಹಾಗೂ ನಿವೃತ್ತ ಪ್ರಧಾನ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು ಇವರು ಸರ್ಕಾರಕ್ಕೆ ಸಲ್ಲಿಸಿರುವ ದಿನಾಂಕ: 19-10-2011ರ ವಿಚಾರಣಾ ವರದಿ

